# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಡಿಸೆಂಬರ್ ೨೨, ೨೦೧೬ (ಪುಷ್ಯ ೧, ಶಕ ವರ್ಷ ೧೯೩೮)<br>Bengaluru, Thursday, December 22, 2016 (Pushya 1, Shaka Varsha 1938) | ಸಂಚಿಕೆ ೫೦<br>Issue 50 |
| --- | --- | --- |


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಹಕಾರ ಸಚಿವಾಲಯ

**ವಿಷಯ :** ಬೆಳಗಾವಿ ಕೈಗಾರಿಕಾ ಸಹಕಾರ ಬ್ಯಾಂಕ್ ಲಿ., ಬೆಳಗಾವಿ ಇದರ ವ್ಯವಹಾರ ಕುರಿತು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 64 ರಡಿ ಶಾಸನಬದ್ಧ ವಿಚಾರಣೆ ಅವಧಿಯನ್ನು ವಿಸ್ತರಿಸುವ ಕುರಿತು.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ:ಸಿಒ 04 ಸಂಮಾಸ 2016, ದಿನಾಂಕ:12-05-2016.

2) ಸಹಕಾರ ಸಂಘಗಳ ನಿಬಂಧಕರ ಕಛೇರಿ ಪತ್ರ ಸಂಖ್ಯೆ: ಯುಬಿಸಿ-1/334/ಐಎನ್‌ಕ್ಯೂ/2013-14, ದಿ : 23-9-2016

**ಪ್ರಸ್ತಾವನೆ :**

ಮೇಲೆ ಓದಲಾದ (1) ರ ಸರ್ಕಾರದ ಆದೇಶದಲ್ಲಿ ಬೆಳಗಾವಿ ಕೈಗಾರಿಕಾ ಸಹಕಾರ ಬ್ಯಾಂಕ್ ಲಿ., ಬೆಳಗಾವಿ ಇದರ ವ್ಯವಹಾರ ಕುರಿತು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 64 ರಡಿ ಶಾಸನಬದ್ಧ ವಿಚಾರಣೆ ಅವಧಿಯನ್ನು ದಿನಾಂಕ:12-07-2016 ರವರೆಗೆ ವಿಸ್ತರಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ (2) ರ ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವೆಯಲ್ಲಿ ಬೆಳಗಾವಿ ಕೈಗಾರಿಕಾ ಸಹಕಾರ ಬ್ಯಾಂಕ್ ಲಿ., ಬೆಳಗಾವಿ ಇದರ ವ್ಯವಹಾರ ಕುರಿತು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 64 ರಡಿ ಶಾಸನಬದ್ಧ ವಿಚಾರಣೆಯ ಪ್ರಕ್ರಿಯೆಯು ದಿನಾಂಕ:12-07-2016 ರಂದು ಪೂರ್ಣಗೊಂಡಿದ್ದು, ಅಧಿವೇಶನದ ಪ್ರಯುಕ್ತ ಸದರಿ ವರದಿಯನ್ನು ತಯಾರಿಸಿ ವರದಿ ಸಲ್ಲಿಸಲು ದಿನಾಂಕ:17-08-2016 ರವರೆಗೆ ಕಾಲಾವಕಾಶ ವಿಸ್ತರಿಸಲು ಶಿಫಾರಸ್ಸು ಮಾಡಿ ನಿಬಂಧಕರು ಸರ್ಕಾರಕ್ಕೆ ಪ್ರಸ್ತಾವೆ ಸಲ್ಲಿಸಿರುತ್ತಾರೆ.

ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 115 ಸಿಎಲ್ಎಂ 2016, ಬೆಂಗಳೂರು, ದಿನಾಂಕ : 11-11-2016.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬೆಳಗಾವಿ ಕೈಗಾರಿಕಾ ಸಹಕಾರ ಬ್ಯಾಂಕ್ ಲಿ., ಬೆಳಗಾವಿ ಇದರ ವ್ಯವಹಾರ ಕುರಿತು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 64 ರಡಿ ಶಾಸನಬದ್ಧ ವಿಚಾರಣೆ ಅವಧಿಯನ್ನು **ದಿನಾಂಕ:13-07-2016 ರಿಂದ 17-08-2016ರ ವರೆಗೆ** ಅಂತಿಮವಾಗಿ ವಿಸ್ತರಿಸಿ ಆದೇಶಿಸಿದೆ.

ಈ ಅವಧಿ ಮುಗಿದ ನಂತರ ಸದರಿ ಪ್ರಕರಣ 64 (2-ಎ) ಉಪಬಂಧಗಳು ಪುನಃ ಜಾರಿಯಲ್ಲಿರುತ್ತದೆ.

**P.R. 654**
**SC-50**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.
**ಕೆ. ರಾಧಾಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ-3,
ಸಹಕಾರ ಇಲಾಖೆ.

### ಒಳಾಡಳಿತ ಸಚಿವಾಲಯ

**ವಿಷಯ :** ನ್ಯಾಯಮೂರ್ತಿ ಶ್ರೀ ಕೆ.ಎನ್. ಕೇಶವನಾರಾಯಣ, ವಿಚಾರಣಾ ಆಯೋಗಕ್ಕೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಅಧಿಸೂಚನೆ ಸಂ: ಹೆಚ್‌ಡಿ 10 ಪಿಸಿಇ 2016, ದಿನಾಂಕ: 16.07.2016.
2. ಕಾರ್ಯದರ್ಶಿ, ನ್ಯಾಯಮೂರ್ತಿ ಶ್ರೀ ಕೆ.ಎನ್.ಕೇಶವನಾರಾಯಣ ವಿಚಾರಣಾ ಆಯೋಗರವರ ಪತ್ರ ದಿನಾಂಕ: 1.9.2016.
3. ಸರ್ಕಾರದ ಅಧೀನ ಕಾರ್ಯದರ್ಶಿ, (ಎಫ್‌ಆರ್&ಬಿಸಿಸಿ), ಆರ್ಥಿಕ ಇಲಾಖೆರವರ ಸರ್ಕಾರಿ ಆದೇಶ ಸಂಖ್ಯೆ: ಆಇ 61 ಬಿಆರ್‌ಎಸ್ 2016, ದಿನಾಂಕ 03/10/2016.

**ಪ್ರಸ್ತಾವನೆ:**

ಮೇಲೆ ಓದಲಾದ(1)ರ ಅಧಿಸೂಚನೆಯಲ್ಲಿ ಶ್ರೀ ಎಂ.ಕೆ. ಗಣಪತಿ, ಡಿವೈಎಸ್ಪಿ, (ಇಲಾಖಾ ವಿಚಾರಣೆ), ಐಜಿಪಿ ಕಛೇರಿ, ಪಶ್ಚಿಮ ವಲಯ, ಮಂಗಳೂರು ಇವರು ದಿನಾಂಕ:07/07/2016ರಂದು ಅಸ್ವಾಭಾವಿಕ ಮರಣ ಹೊಂದಿದ್ದು, ಇದಕ್ಕೆ ಕಾರಣವಾದ ಸಂದರ್ಭಗಳು ಹಾಗೂ ಘಟನೆಗಳ ಕುರಿತು ಮತ್ತು ಈ ಸಂಬಂಧ ಮಡಿಕೇರಿ ನಗರ ಪೊಲೀಸ್ ಠಾಣೆಯಲ್ಲಿ ದಿ: 07/07/2016ರಂದು ದಾಖಲಾಗಿರುವ ಯುಡಿಆರ್ ನಂ.9/2016 ಕುರಿತು ನ್ಯಾಯಾಂಗ ವಿಚಾರಣೆಗಾಗಿ ನ್ಯಾಯಮೂರ್ತಿ ಶ್ರೀ ಕೆ.ಎನ್. ಕೇಶವನಾರಾಯಣ, ನಿವೃತ್ತ ನ್ಯಾಯಾಧೀಶರು, ಕರ್ನಾಟಕ ಉಚ್ಚ ನ್ಯಾಯಾಲಯ ಇವರನ್ನು ಏಕ ಸದಸ್ಯ ವಿಚಾರಣಾ ಆಯೋಗ ನೇಮಿಸಿ, ಅಧಿಸೂಚಿಸಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಕಾರ್ಯದರ್ಶಿ, ನ್ಯಾಯಮೂರ್ತಿ ಶ್ರೀ ಕೆ.ಎನ್. ಕೇಶವನಾರಾಯಣ ವಿಚಾರಣಾ ಆಯೋಗದವರು, ಆಯೋಗದ ಅಧಿಕಾರಿ/ಸಿಬ್ಬಂದಿರವರಿಗೆ ವೇತನ, ಲೇಖನ ಸಾಮಗ್ರಿ, ಇನ್ನಿತರೆ ಖರ್ಚು–ವೆಚ್ಚಗಳನ್ನು ಭರಿಸಲು ಅನುಕೂಲವಾಗುವಂತೆ ಪ್ರಾರಂಭಿಕವಾಗಿ ₹. 50,00,000/– (ರೂಪಾಯಿ ಐವತ್ತು ಲಕ್ಷಗಳು ಮಾತ್ರ) ಬಿಡುಗಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಮೇಲೆ ಓದಲಾದ (3)ರ ಪತ್ರದಲ್ಲಿ ಸರ್ಕಾರದ ಅಧೀನ ಕಾರ್ಯದರ್ಶಿ, (ಎಫ್‌ಆರ್&ಬಿಸಿಸಿ), ಆರ್ಥಿಕ ಇಲಾಖೆರವರು 2016–17ನೇ ಸಾಲಿಗೆ ನ್ಯಾಯಮೂರ್ತಿ ಶ್ರೀ ಕೆ.ಎನ್. ಕೇಶವನಾರಾಯಣ ವಿಚಾರಣಾ ಆಯೋಗದ ಖರ್ಚು–ವೆಚ್ಚಗಳಿಗಾಗಿ ಲೆಕ್ಕ ಶೀರ್ಷಿಕೆ "2070–00–105–0–02–059 ಇತರ ವಿಚಾರಣಾ ಆಯೋಗ (ಯೋಜನೇತರ)" ದಡಿ ₹. 50.00 ಲಕ್ಷ (ರೂ.ಐವತ್ತು ಲಕ್ಷಗಳು ಮಾತ್ರ) ಗಳನ್ನು ಹೆಚ್ಚುವರಿಯಾಗಿ ಬಿಡುಗಡೆ ಮಾಡಿ ಮಂಜೂರಾತಿ ನೀಡಿದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 10 ಪಿಸಿಇ 2016(ಭಾಗ–3) ಬೆಂಗಳೂರು, ದಿನಾಂಕ 05/10/2016**

ನ್ಯಾಯಮೂರ್ತಿ ಶ್ರೀ ಕೆ.ಎನ್. ಕೇಶವನಾರಾಯಣ ವಿಚಾರಣಾ ಆಯೋಗಕ್ಕೆ ತನ್ನ ಅಧಿಕಾರಿ / ಸಿಬ್ಬಂದಿಯ ವೇತನ, ಲೇಖನ ಸಾಮಗ್ರಿಗಳು ಮತ್ತು ಇನ್ನಿತರೆ ಖರ್ಚು–ವೆಚ್ಚಗಳಿಗೆ ಅನುಕೂಲವಾಗುವಂತೆ 2016–2017ನೇ ಸಾಲಿನ ಆರ್ಥಿಕ ವರ್ಷಕ್ಕೆ ಸಂಬಂಧಿಸಿದಂತೆ ₹. 50,00,000/– (ರೂಪಾಯಿ ಐವತ್ತು ಲಕ್ಷಗಳು ಮಾತ್ರ) ಗಳನ್ನು ಲೆಕ್ಕ ಶೀರ್ಷಿಕೆ **"2070–00–105–0–02–059 ಇತರ ವಿಚಾರಣಾ ಆಯೋಗ (ಯೋಜನೇತರ)"** ಅಡಿಯಲ್ಲಿ ಭರಿಸಲು ಹಣವನ್ನು ಬಿಡುಗಡೆ ಮಾಡಲಾಗಿದೆ.

ಸದರಿ ಆಯೋಗದ ಕಾರ್ಯದರ್ಶಿಯವರಾದ ಶ್ರೀ ಬಿ.ಶಿವಲಿಂಗೇಗೌಡ ಇವರು ಹಣವನ್ನು ಹಿಂತೆಗೆಯುವ ಮತ್ತು ವಿತರಿಸುವ ಅಧಿಕಾರಿಯಾಗಿ ಕರ್ತವ್ಯ ನಿರ್ವಹಿಸುವರು.

ಈ ಆದೇಶವನ್ನು ಆರ್ಥಿಕ ಇಲಾಖೆ ಆದೇಶ ಸಂಖ್ಯೆ: : ಆಇ 61 ಬಿಆರ್‌ಎಸ್ 2016, ದಿನಾಂಕ 03/10/2016ರ ಅನ್ವಯ ಹೊರಡಿಸಲಾಗಿದೆ.

**P.R. 655**
**SC-25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಕೆ.ಪದ್ಮಿನಿದೇವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ. (ಕಾನೂನು ಮತ್ತು ಸುವ್ಯವಸ್ಥೆ)

## ಒಳಾಡಳಿತ ಸಚಿವಾಲಯ

**ವಿಷಯ :** ನ್ಯಾಯಮೂರ್ತಿ ಶ್ರೀ ಕೆ.ಎನ್. ಕೇಶವನಾರಾಯಣ, ವಿಚಾರಣಾ ಆಯೋಗಕ್ಕೆ ಕಟ್ಟಡವನ್ನು ಒದಗಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂ: ಹೆಚ್‌ಡಿ 10 ಪಿಸಿಇ 2016, ದಿನಾಂಕ: 16.07.2016.
2. ಸರ್ಕಾರದ ಸಮ ಸಂಖ್ಯೆ ಅ.ಸ. ಪತ್ರ ದಿನಾಂಕ:04/10/2016.
3. ಡಿಜಿ ಮತ್ತು ಐಜಿಪಿ, ಬೆಂಗಳೂರುರವರ ಪತ್ರ ಸಂಖ್ಯೆ:ಬಿ4ಸಿ/35/ 2016–17, ದಿನಾಂಕ:05/10/2016.

**ಪ್ರಸ್ತಾವನೆ :**

ಮೇಲೆ ಓದಲಾದ(1)ರ ಅಧಿಸೂಚನೆಯಲ್ಲಿ ಶ್ರೀ ಎಂ.ಕೆ. ಗಣಪತಿ, ಡಿವೈಎಸ್ಪಿ, (ಇಲಾಖಾ ವಿಚಾರಣೆ), ಐಜಿಪಿ ಕಛೇರಿ, ಪಶ್ಚಿಮ ವಲಯ, ಮಂಗಳೂರು ಇವರು ದಿನಾಂಕ:07/07/2016ರಂದು ಅಸ್ವಾಭಾವಿಕ ಮರಣ ಹೊಂದಿದ್ದು, ಈ ಕುರಿತು ನ್ಯಾಯಾಂಗ ವಿಚಾರಣೆಗಾಗಿ ನ್ಯಾಯಮೂರ್ತಿ ಶ್ರೀ ಕೆ.ಎನ್. ಕೇಶವನಾರಾಯಣ, ನಿವೃತ್ತ ನ್ಯಾಯಾಧೀಶರು, ಕರ್ನಾಟಕ ಉಚ್ಚ ನ್ಯಾಯಾಲಯ ಇವರನ್ನು ಏಕ ಸದಸ್ಯ ವಿಚಾರಣಾ ಆಯೋಗ ನೇಮಿಸಿ, ಅಧಿಸೂಚಿಸಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ನ್ಯಾಯಮೂರ್ತಿ ಶ್ರೀ ಕೆ.ಎನ್. ಕೇಶವನಾರಾಯಣ ವಿಚಾರಣಾ ಆಯೋಗವು ಕಛೇರಿ ಕರ್ತವ್ಯ ನಿರ್ವಹಿಸಲು ಸಿಐಡಿ ಫಾರೆಸ್ಟ್ ಸೆಲ್‌ಗೆ ಹೊಂದಿಕೊಂಡಿರುವ, ಕಾವೇರಿ ಭವನದ 5ನೇ ಮಹಡಿಯ ಖಾಲಿ ಕಟ್ಟಡದ 2000 ಚದರ ಅಡಿ ಜಾಗವನ್ನು ನೀಡುವಂತೆ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರನ್ನು ಕೋರಲಾಗಿರುತ್ತದೆ.

ಮೇಲೆ ಓದಲಾದ (3)ರ ಪತ್ರದಲ್ಲಿ ನ್ಯಾಯಮೂರ್ತಿ ಶ್ರೀ ಕೆ.ಎನ್. ಕೇಶವನಾರಾಯಣ ವಿಚಾರಣಾ ಆಯೋಗವು ಕರ್ತವ್ಯ ನಿರ್ವಹಿಸಲು ಸಿಐಡಿ ಅರಣ್ಯ ಘಟಕಕ್ಕೆ ಹೊಂದಿಕೊಂಡಿರುವ ಕಾವೇರಿ ಭವನದ 5ನೇ ಮಹಡಿಯ ಖಾಲಿ ಕಟ್ಟಡದ 2000 ಚದರ ಅಡಿ ಜಾಗವನ್ನು ಬಿಟ್ಟುಕೊಡಲು ಯಾವುದೇ ಅಭ್ಯಂತರವಿರುವುದಿಲ್ಲವೆಂದು ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರು ವರದಿ ಸಲ್ಲಿಸಿರುತ್ತಾರೆ.

ಅದರಂತೆ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 10 ಪಿಸಿಇ 2016(ಭಾಗ–1) ಬೆಂಗಳೂರು, ದಿನಾಂಕ 06/10/2016.**

ನ್ಯಾಯಮೂರ್ತಿ ಶ್ರೀ ಕೆ.ಎನ್. ಕೇಶವನಾರಾಯಣ ವಿಚಾರಣಾ ಆಯೋಗವು ಕರ್ತವ್ಯ ನಿರ್ವಹಿಸಲು ಸಿಐಡಿ ಅರಣ್ಯ ಘಟಕಕ್ಕೆ ಹೊಂದಿಕೊಂಡಿರುವ ಕಾವೇರಿ ಭವನದ 5ನೇ ಮಹಡಿಯ ಖಾಲಿ ಕಟ್ಟಡದ 2000 ಚದರ ಅಡಿ ಜಾಗವನ್ನು ವಿಚಾರಣಾ ಆಯೋಗಕ್ಕೆ 06 ತಿಂಗಳ ಅವಧಿಗೆ ಅಥವಾ ಆಯೋಗದ ಅವಧಿ ಮುಗಿಯುವವರೆಗೆ ಸದರಿ ಕಟ್ಟಡವನ್ನು ಆಯೋಗವು ಕಾರ್ಯನಿರ್ವಹಿಸಲು ನೀಡಲಾಗಿದೆ.

**P.R. 656**
**SC-25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.
**ಕೆ.ಪದ್ಮಿನಿದೇವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ. (ಕಾನೂನು ಮತ್ತು ಸುವ್ಯವಸ್ಥೆ)

## ಸಂಸದೀಯ ವ್ಯವಹಾರಗಳ ಸಚಿವಾಲಯ

**ವಿಷಯ :** ಭಾಷಾಂತರ ನಿರ್ದೇಶನಾಲಯದಲ್ಲಿ ಹೈದರಾಬಾದ್ ಕರ್ನಾಟಕ ವೃಂದಕ್ಕೆ ಮೀಸಲಿರಿಸಿರುವ ಒಂದು ಸಹಾಯಕ ನಿರ್ದೇಶಕರ ಹುದ್ದೆಗೆ ಅಧಿಕಾರಿಗಳನ್ನು ಮರುಹಂಚಿಕೆ ಮಾಡುವ ಬಗ್ಗೆ.

**ಉಲ್ಲೇಖ:** (1) ಅಧಿಸೂಚನೆ ಸಂಖ್ಯೆ ಸಂವ್ಯಶಾಇ 39 ಭಾನಿವಿ 2013, ದಿ:06.02.2014

(2) ಸುತ್ತೋಲೆ ಸಂಖ್ಯೆ. ಸಂವ್ಯಶಾಇ 74 ಆಡಳಿತ 2013, ದಿ:10.03.1984.

**ಪ್ರಸ್ತಾವನೆ**

ಉಲ್ಲೇಖ(1)ರ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 39 ಭಾನಿವಿ 2013, ದಿನಾಂಕ: 06.02.2014 ರಲ್ಲಿ ಭಾಷಾಂತರ ನಿರ್ದೇಶನಾಲಯದ ವಿವಿಧ ವೃಂದಗಳಲ್ಲಿ ಹೈದ್ರಾಬಾದ್-ಕರ್ನಾಟಕ ಪ್ರದೇಶದವರಿಗಾಗಿ ಶೇಕಡ 8 ರಷ್ಟು ಹುದ್ದೆಗಳನ್ನು ಗುರುತಿಸಿ ಅಧಿಸೂಚಿಸಲಾಗಿತ್ತು.

ಉಲ್ಲೇಖಿತ(2) ಸುತ್ತೋಲೆ ಸಂಖ್ಯೆ:ಭಾನಿ 74 ಆಡಳಿತ/ಹೈಕಕೋ/2013 ದಿನಾಂಕ:10.03.2014 ರಲ್ಲಿ ಹೈದ್ರಾಬಾದ್-ಕರ್ನಾಟಕ ಪ್ರದೇಶಕ್ಕೆ ಒಳಪಡುವ ಭಾಷಾಂತರ ನಿರ್ದೇಶನಾಲಯದ ಎಲ್ಲಾ ಅಧಿಕಾರಿ/ನೌಕರರಿಂದ ಸ್ಥಳೀಯ ವೃಂದಕ್ಕೆ ಸೇರಲು ತಮ್ಮ ಇಚ್ಛೆಯನ್ನು ತಿಳಿಸುವಂತೆ ಸೂಚಿಸಲಾಗಿತ್ತು.

ಶ್ರೀ ಭಕ್ತರಾಜ ಪಾಟೀಲ್, ಸಂಶೋಧನಾಧಿಕಾರಿ ಇವರು ದಿನಾಂಕ:17.03.2014 ರಂದು ಹಾಗೂ ಶ್ರೀ ಅಬ್ದುಲ್ ಗಫಾರ್ ಇವರು ದಿನಾಂಕ:10.04.2014 ರಂದು ಸ್ಥಳೀಯ ವೃಂದಕ್ಕೆ ಸೇರುವ ಇಚ್ಛೆಯನ್ನು ವ್ಯಕ್ತಪಡಿಸಿ ಮನವಿಯನ್ನು ಸಲ್ಲಿಸಿದ್ದರು.

ದಿನಾಂಕ:05.07.2014 ರಂದು ಶ್ರೀ ಭಕ್ತರಾಜ ಪಾಟೀಲ್, ಸಂಶೋಧನಾಧಿಕಾರಿ ಇವರು ಈ ಹಿಂದೆ ವ್ಯಕ್ತಪಡಿಸಿದ ಇಚ್ಛೆಯನ್ನು ಹಿಂದಕ್ಕೆ ಪಡೆದು ರಾಜ್ಯಮಟ್ಟದ ಸಾಮಾನ್ಯ ಜ್ಯೇಷ್ಠತೆಯಲ್ಲಿ (ಮಾತೃ ವೃಂದದಲ್ಲಿ) ಮುಂದುವರೆಯಲು ಬಯಸುತ್ತೇನೆ ಎಂದು ಮನವಿಯನ್ನು ಸಲ್ಲಿಸಿ ಭಾಷಾಂತರ ನಿರ್ದೇಶನಾಲಯದಲ್ಲಿ ಸಹಾಯಕ ನಿರ್ದೇಶಕರ ಹುದ್ದೆಗೆ ಮುಂಬಡ್ತಿ ನೀಡಲು ದಿನಾಂಕ:07.08.2014 ರಂದು ನಡೆದ ಮುಂಬಡ್ತಿ ಸಮಿತಿ ಸಭೆಯ ನಡವಳಿಯಲ್ಲಿ "ಈಗಾಗಲೇ ಹೈದ್ರಾಬಾದ್-ಕರ್ನಾಟಕ ಪ್ರದೇಶದ ಅಭ್ಯರ್ಥಿಗಳು ಶೇಕಡ 8 ರಷ್ಟು ಮೀಸಲಿರಿಸಿದ ಹುದ್ದೆಗೆ ಅರ್ಜಿಯನ್ನು ನೀಡಿದ್ದು, ಸದರಿ ಕ್ರಮವು ಇನ್ನು ಜಾರಿಗೆ ತರುವುದರಲ್ಲಿ ತೊಡಕುಗಳಿದ್ದು ಮುಂಬಡ್ತಿ ಅಭ್ಯರ್ಥಿಗಳು ಅಪೇಕ್ಷಿಸಿದಲ್ಲಿ ಮುಂಬಡ್ತಿ ಆಯ್ಕೆ ಸಮಿತಿ ಅಧ್ಯಕ್ಷರ ಆದೇಶದನ್ವಯ ಸಾಮಾನ್ಯ ನೇಮಕಾತಿಯಲ್ಲಿ ಅರ್ಹರಿದ್ದಾಗ ಅರ್ಹ ಹುದ್ದೆಯನ್ನು ಮುಂಬಡ್ತಿ ನೀಡಲು ಅವಕಾಶ ಕಲ್ಪಿಸಬಹುದಾಗಿರುತ್ತದೆ" ಎಂದು ನಮೂದಿಸಲಾಗಿರುತ್ತದೆ.

ಅಧಿಸೂಚನೆ ಸಂಖ್ಯೆ:ಸಂವ್ಯಶಾಇ 27 ಭಾನಿವಿ 2014 ದಿನಾಂಕ:11.08.2014 ರಲ್ಲಿ ಶ್ರೀ ಭಕ್ತರಾಜ ಪಾಟೀಲ್, ಸಂಶೋಧನಾಧಿಕಾರಿ ಇವರಿಗೆ ಶ್ರೀ ಪೂಲೇಪ್ಪ, ಇವರ ವಯೋನಿವೃತ್ತಿಯಿಂದ ತೆರವಾದ ಸಹಾಯಕ ನಿರ್ದೇಶಕರ ಹುದ್ದೆಗೆ ಸಾಮಾನ್ಯ ನೇಮಕಾತಿಯಲ್ಲಿ ಮುಂಬಡ್ತಿಯನ್ನು ಪಡೆದಿರುತ್ತಾರೆ.

ದಿನಾಂಕ:06.02.2014 ರಂದು ಹೊರಡಿಸಲಾಗಿದ್ದ ಅಧಿಸೂಚನೆಯನ್ನು ರದ್ದುಗೊಳಿಸಿ, ಅಧಿಸೂಚನೆ ಸಂಖ್ಯೆ. ಸಂವ್ಯಶಾಇ 39 ಭಾನಿವಿ 2013 ದಿನಾಂಕ:10.11.2014ರಲ್ಲಿ ಭಾಷಾಂತರ ನಿರ್ದೇಶನಾಲಯದಲ್ಲಿ ವಿವಿಧ ವೃಂದಗಳಲ್ಲಿ ಹೈದ್ರಾಬಾದ್-ಕರ್ನಾಟಕ ಪ್ರದೇಶದವರಿಗಾಗಿ ಶೇಕಡ 8 ರಷ್ಟು ಹುದ್ದೆಗಳನ್ನು ಗುರುತಿಸಿ ಅಧಿಸೂಚಿಸಲಾಯಿತು.

ಈ ಸಂಬಂಧ ಸಿಆಸುಇ (ಹೈದರಾಬಾದ್-ಕರ್ನಾಟಕ) ಕೋಶವನ್ನು ಸಮಾಲೋಚಿಸಲಾಗಿ, ಶ್ರೀ ಭಕ್ತರಾಜ್ ಪಾಟೀಲ್ ಸ್ಥಳೀಯ ವೃಂದ ಆಯ್ಕೆ ಬಯಸಿ ದಿನಾಂಕ:17.03.2014 ರಂದು ಆಯ್ಕೆ ಚಲಾಯಿಸಿದ್ದು ಸದರಿ ಆಯ್ಕೆಯು ತೆರೆದ ಆಯ್ಕೆ ಕಿಂಡಿ ಮುಚ್ಚುವ ದಿನಾಂಕದೊಳಗೆ ಇದ್ದು ಈ ಅವಧಿಯೊಳಗೆ ನೀಡಲಾದ ಆಯ್ಕೆಯು ಅಂತಿಮವಾಗಿದ್ದು, ತದನಂತರದ ದಿನಗಳಲ್ಲಿ ಸದರಿ ಆಯ್ಕೆಯನ್ನು ಬದಲಾಯಿಸುವಂತಿಲ್ಲ. ಈ ಹಿನ್ನೆಲೆಯಲ್ಲಿ ಸದರಿಯವರು ಸ್ಥಳೀಯ ವೃಂದದಿಂದ ಮಿಕ್ಕುಳಿದ ವೃಂದಕ್ಕೆ ಹೋಗುವ ಇಷ್ಟವನ್ನು ದಿನಾಂಕ:10.07.2014 ರಂದು (ಆಯ್ಕೆ ಕಿಂಡಿ ಮುಚ್ಚಿದ ತರುವಾಯ) ತಿಳಿಸಿದ್ದು ಇದನ್ನು ಪರಿಗಣಿಸಲು ಸಾಧ್ಯವಿಲ್ಲ.

ಶ್ರೀ ಭಕ್ತರಾಜ ಪಾಟೀಲ್, ಇವರು ಸಹಾಯಕ ನಿರ್ದೇಶಕರಾಗಿ ಬಡ್ತಿ ನೀಡಿದ ಮೇಲೆ ಹೈದ್ರಾಬಾದ್-ಕರ್ನಾಟಕ ವೃಂದ ರಚಿಸಿದ ದಿನಾಂಕ:06.02.2014ರ ಅಧಿಸೂಚನೆಯನ್ನು ರದ್ದುಪಡಿಸಿ ದಿನಾಂಕ:10.11.2014 ರಂದು ಸ್ಥಳೀಯ ವೃಂದ ಪುನ:ರಚಿಸಿ ಒಂದು ಹುದ್ದೆಯನ್ನು ಹೈದರಾಬಾದ-ಕರ್ನಾಟಕ ವೃಂದಕ್ಕೆ ಮೀಸಲಿರಿಸಿದೆ. ಇದರ ಹಿನ್ನಲೆಯಲ್ಲಿ ಈ ವೃಂದದಲ್ಲಿರುವ ಅಧಿಕಾರಿಗಳನ್ನು The Karnataka Public Employment(Reservation in appointment for Hyderabad Karnataka) Order, 2013 ರ ನಿಯಮ 4(2) ರನ್ವಯ ಹೈದರಾಬಾದ್-ಕರ್ನಾಟಕ ವೃಂದಕ್ಕೆ ಹಂಚಿಕೆ ಮಾಡಬೇಕಾಗಿದೆ ಹಾಗೂ ಈ ವೃಂದಲ್ಲಿ ಪ್ರಸ್ತುತ ಇರುವವರನ್ನು ತಾತ್ಕಾಲಿಕ (Provisional) ಬಡ್ತಿಯೆಂದು ಪರಿಗಣಿಸಿ, ಪ್ರಸ್ತುತ ಸದರಿ ವೃಂದದಲ್ಲಿ ಹೈದರಾಬಾದ್-ಕರ್ನಾಟಕ ವೃಂದಕ್ಕೆ ಒಂದು ಹುದ್ದೆ ಮೀಸಲಿರಿಸಿರುವುದರಿಂದ The Karnataka Public Employment(Reservation in appointment for Hyderabad Karnataka) Order, 2013 ರ ನಿಯಮ ಪ್ಯಾರಾ 12 ರನ್ವಯ 1.1.2013 ರ ನಂತರ ಯಾವುದೇ ವೃಂದ ರಚನೆಗೆ ಪೂರ್ವದಲ್ಲಿ ಮಾಡಲಾದ ಬಡ್ತಿಯನ್ನು ತಾತ್ಕಾಲಿಕ (Provisional) ಬಡ್ತಿಯೆಂದು ಪರಿಗಣಿಸಿ ಪುನ: ಪರಿಶೀಲಿಸಿ ಮರುಹಂಚಿಕೆ ಮಾಡಬೇಕಾಗುತ್ತದೆ.

ಮೇಲಿನ ಹಿನ್ನೆಲೆಯಲ್ಲಿ 01.01.2013 ರ ನಂತರ ದಿನಾಂಕ: 10.11.2014 ರ ಹಿಂದೆ ಬಡ್ತಿ ನೀಡಲಾಗಿದ್ದ ಹಾಗೂ ಸೇವೆಯಲ್ಲಿರುವ ಸಹಾಯಕ ನಿರ್ದೇಶಕರ ಪೈಕಿ ದಿನಾಂಕ: 10.11.2014 ರಂದು ಸಹಾಯಕ ನಿರ್ದೇಶಕರ ವೃಂದದಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳಿಗೆ 15 ದಿನಗಳೊಳಗಾಗಿ ಹೈದರಾಬಾದ್-ಕರ್ನಾಟಕ ವೃಂದಕ್ಕೆ ಸೇರಬಯಸುವವರು ತಮ್ಮ ಇಚ್ಛತಾ ಪತ್ರವನ್ನು ನೀಡಲು ದಿನಾಂಕ: 07.09.2016ರ ಸೂಚನಾ ಪತ್ರದಲ್ಲಿ ತಿಳಿಸಲಾಗಿತ್ತು.

ಶ್ರೀ ಭಕ್ತರಾಜ ಪಾಟೀಲ್, ಸಹಾಯಕ ನಿರ್ದೇಶಕರು, ಇವರು ಹೈದರಾಬಾದ್ ಕರ್ನಾಟಕ ಪ್ರದೇಶಕ್ಕೆ ಸೇರಿದವರಾಗಿರುವುದರಿಂದ, ತಮ್ಮನ್ನು ರಾಜ್ಯಮಟ್ಟದ ಸ್ಥಳೀಯ ವೃಂದಕ್ಕೆ ಪರಿಗಣಿಸಿ ತಮ್ಮ ಜೇಷ್ಠತೆಯನ್ನು ನಿಗಧಿಪಡಿಸಬೇಕೆಂದು ದಿನಾಂಕ: 19.09.2016ರ ಮನವಿಯಲ್ಲಿ ಕೋರಿರುತ್ತಾರೆ.

ಇದರ ಹಿನ್ನೆಲೆಯಲ್ಲಿ, ಸಹಾಯಕ ನಿರ್ದೇಶಕರ ವೃಂದದಲ್ಲಿ ಇರುವ ಅಧಿಕಾರಿಗಳ ಪೈಕಿ ಹೈದರಾಬಾದ್–ಕರ್ನಾಟಕ ವೃಂದಕ್ಕೆ ಸೇರಿದ ಒಂದು ಹುದ್ದೆಗೆ ಅರ್ಹತೆಯುಳ್ಳ ಇಚ್ಛೆತೆ ವ್ಯಕ್ತ ಪಡಿಸಿದ ಅಧಿಕಾರಿಯನ್ನು The Karnataka Public Employment (Reservation in appointment for Hyderabad Karnataka) order, 2013ರ ಪ್ಯಾರಾ 12ರನ್ವಯ ಮರುಹಂಚಿಕೆ ಮಾಡಬೇಕಾಗಿದ್ದು ಅದರನ್ವಯ ಶ್ರೀ ಭಕ್ತರಾಜ ಪಾಟೀಲ್, ಸಹಾಯಕ ನಿರ್ದೇಶಕರು ಇವರನ್ನು ಹೈದರಾಬಾದ್ ಕರ್ನಾಟಕ ಪ್ರದೇಶಕ್ಕೆ ಸೇರಿದ ವೃಂದಕ್ಕೆ ವರ್ಗಾವಣೆ ನೀಡಬೇಕಾಗಿದೆ.

ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಂವ್ಯಶಾಇ 43 ಭಾನಿವಿ 2015, ಬೆಂಗಳೂರು, ದಿನಾಂಕ:08.11.2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ದಿನಾಂಕ:10.11.2014ರಲ್ಲಿ ಪುನರಚಿಸಿದ ಹೈದರಾಬಾದ್–ಕರ್ನಾಟಕದ ವೃಂದಗಳ ಪೈಕಿ ಸಹಾಯಕ ನಿರ್ದೇಶಕರ ವೃಂದಕ್ಕೆ ಮೀಸಲಿರಿಸಲಾದ ಒಂದು ಹುದ್ದೆಗೆ ಆ ವೃಂದದಲ್ಲಿರುವ ಅಧಿಕಾರಿಗಳ ಪೈಕಿ ಇಚ್ಛತಾ ಪತ್ರ ನೀಡಿರುವ ಶ್ರೀ ಭಕ್ತರಾಜ್ ಪಾಟೀಲ್, ಸಹಾಯಕ ನಿರ್ದೇಶಕರು ಇವರು ಆ ವೃಂದಕ್ಕೆ ಸೇರಿದವರೆಂದು ಘೋಷಿಸುವ ಎಲ್ಲ ಅರ್ಹತೆ ಇದ್ದುದರಿಂದ ಅವರನ್ನು The Karnataka Public Employment (Reservation in appointment for Hyderabad-Karnataka) order, 2013ರ ಪ್ಯಾರಾ 12ರನ್ವಯ ಹೈದರಾಬಾದ್–ಕರ್ನಾಟಕದ ಸ್ಥಳೀಯ ವೃಂದಕ್ಕೆ ಮರು ಹಂಚಿಕೆ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ರಾಜ್‌ಕುಮಾರ್**
ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳ ಇಲಾಖೆ

**PR-649**
**SC-50**

## ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನ ಶಾಸ್ತ್ರ ಸಚಿವಾಲಯ

**ವಿಷಯ :** ಅನಧಿಕೃತ ದಾಸ್ತಾನು/ಸಾಗಾಣಿಕೆ ಬಗ್ಗೆ ಮಾಹಿತಿ ನೀಡುವ ಮಾಹಿತಿದಾರರಿಗೆ ಬಹುಮಾನ ನೀಡುವ ಬಗ್ಗೆ.

**ಓದಲಾದ :** ದಿನಾಂಕ 10.06.2016ರ ಸರ್ಕಾರಿ ಆದೇಶ ಸಂಖ್ಯೆ ಆನಾಸ 210 ಡಿಆರ್‌ಎ 2014.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ 10.06.2016ರ ಸರ್ಕಾರಿ ಆದೇಶದಲ್ಲಿ ಅನರ್ಹ ಪಡಿತರ ಚೀಟಿದಾರರು ಮತ್ತು ಅನಧಿಕೃತ ದಾಸ್ತಾನು/ಸಾಗಾಣಿಕೆ ಬಗ್ಗೆ ಮಾಹಿತಿ ನೀಡುವ ಮಾಹಿತಿದಾರರಿಗೆ ಬಹುಮಾನ ನೀಡುವ ಯೋಜನೆಯನ್ನು ಜಾರಿಗೆ ತರಲಾಗಿದೆ. ಇದಕ್ಕಾಗಿ ಆಯುಕ್ತರ ಪಿ.ಡಿ ಖಾತೆಯಲ್ಲಿ ಲಭ್ಯವಿರುವ ಅನುದಾನವನ್ನು ಬಳಸಿಕೊಳ್ಳಲು ಆದೇಶಿಸಲಾಗಿದೆ. ಪ್ರಸ್ತುತ ಈ ಅನುದಾನವನ್ನು ರಹಸ್ಯ ಸೇವಾ ವೆಚ್ಚಗಳಡಿಯಲ್ಲಿ ಭರಿಸಲು ಹಾಗೂ ಅನಧಿಕೃತ ದಾಸ್ತಾನು ಮತ್ತು ಸಾಗಾಣಿಕೆ ಬಗ್ಗೆ ಮಾಹಿತಿ ನೀಡುವ ಮಾಹಿತಿದಾರರಿಗೆ ಬಹುಮಾನ ನೀಡುವ ಯೋಜನೆಯನ್ನು ಜಿಲ್ಲಾಧಿಕಾರಿಗಳ ಮೂಲಕ ಅನುಷ್ಠಾನಗೊಳಿಸಲು ಉದ್ದೇಶಿಸಿದೆ. ಈ ಹಿನ್ನೆಲೆಯಲ್ಲಿ ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ : ಆನಾಸ 274 ಇಭತ 2016,ಬೆಂಗಳೂರು, ದಿನಾಂಕ: 11.11.2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸಾರ್ವಜನಿಕ ವಿತರಣಾ ವ್ಯವಸ್ಥೆಯಡಿ ಪಡಿತರ ವಸ್ತುಗಳನ್ನು ಅನಧಿಕೃತ ದಾಸ್ತಾನು/ಸಾಗಾಣಿಕೆ ಮಾಡುವವರ ಬಗ್ಗೆ ಮಾಹಿತಿ ನೀಡುವ ಮಾಹಿತಿದಾರರಿಗೆ ಬಹುಮಾನ ನೀಡುವ ಜವಾಬ್ದಾರಿಯನ್ನು ಜಿಲ್ಲಾಧಿಕಾರಿಗಳಿಗೆ ಪ್ರತ್ಯಾಯೋಜಿಸಿದೆ. ಅದರಂತೆ, ಯೋಜನೆಯನ್ನು ಅನುಷ್ಠಾನಗೊಳಿಸತಕ್ಕದ್ದು.

ಸರ್ಕಾರಿ ಆದೇಶ ಸಂಖ್ಯೆ: ಆನಾಸ 210 ಡಿಆರ್‌ಎ 2014, ದಿನಾಂಕ 10.06.2016ರಲ್ಲಿ ನಿಗಧಿಪಡಿಸಿರುವ ಮಾನದಂಡಗಳಿಗೆ ಅನುಗುಣವಾಗಿ ಬಹುಮಾನದ ಮೊತ್ತವನ್ನು ಮಾಹಿತಿದಾರರಿಗೆ ಜಿಲ್ಲಾಧಿಕಾರಿಗಳು ಪಾವತಿಸತಕ್ಕದ್ದು.

ಬಹುಮಾನದ ವೆಚ್ಚವನ್ನು ಆಯುಕ್ತರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಇವರು ಜಿಲ್ಲಾಧಿಕಾರಿಗಳಿಗೆ ಅಗತ್ಯತೆಗೆ ಅನುಗುಣವಾಗಿ ಬಿಡುಗಡೆಗೊಳಿಸತಕ್ಕದ್ದು, ಬಹುಮಾನ ನೀಡುವ ಮೊತ್ತವನ್ನು ರಹಸ್ಯ ಸೇವಾ ವೆಚ್ಚಗಳ ಲೆಕ್ಕಶೀರ್ಷಿಕೆ "117-Scholarships and Incentives" ರಡಿಯಲ್ಲಿ ನಿರ್ವಹಿಸತಕ್ಕದ್ದು.

ಆಯುಕ್ತರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆರವರು ಸಾದಿಲ್ವಾರು ವೆಚ್ಚ ಕೈಪಿಡಿ ನಿಯಮ 47(4)ರಂತೆ ವಾರ್ಷಿಕವಾಗಿ ವೆಚ್ಚಗಳ ನೈಜ ಆಡಳಿತಾತ್ಮಕ ಲೆಕ್ಕ ಪರಿಶೋಧನೆ ಮಾಡಿ ಪ್ರಮಾಣ ಪತ್ರವನ್ನು ಮಹಾಲೇಖಪಾಲರಿಗೆ ಸಲ್ಲಿಸತಕ್ಕದ್ದು.

ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 799 ವೆಚ್ಚ–5/2016 ದಿನಾಂಕ: 03.10.2016 ಮತ್ತು ಎಫ್‌ಡಿ 932 ವೆಚ್ಚ–5/2016 ದಿನಾಂಕ: 22.10.2016ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಹನುಮಂತರಾಯಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ
ಹಾಗೂ ಕಾನೂನು ಮಾಪನ ಶಾಸ್ತ್ರ ಇಲಾಖೆ.

**PR-652**
**SC-200**

## ಸಹಕಾರ ಸಚಿವಾಲಯ

ವಿಷಯ: 2016–17ನೇ ಸಾಲಿನಲ್ಲಿ ಯಶಸ್ವಿನಿ ಆರೋಗ್ಯ ರಕ್ಷಣಾ ಯೋಜನೆ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಮೂರನೇ ಕಂತಿನ ಹಣ ಬಿಡುಗಡೆ ಮಾಡುವ ಕುರಿತು.

ಓದಲಾಗಿದೆ.
1. ಸರ್ಕಾರಿ ಆದೇಶ ಸಂಖ್ಯೆ:ಸಇ 115 ಆಆಸ 2016, ದಿನಾಂಕ: 26–04–2016.
2. ಸರ್ಕಾರದ ಆದೇಶ ಸಂಖ್ಯೆ:ಎಫ್.ಡಿ 3 ಟಿಎಫ್‌ಪಿ 2016, ದಿನಾಂಕ:02–04–2016.
3. ಸರ್ಕಾರದ ಸಮಸಂಖ್ಯೆ ಆದೇಶದ ದಿನಾಂಕ:01–06–2016 & 19–08–2016
4. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಆರ್‌ಸಿಎಸ್/ ಯಶಸ್ವಿನಿ/5/2016–17, ದಿನಾಂಕ:03–11–2016.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ 2016–17ನೇ ಸಾಲಿನಲ್ಲಿ ಸಹಕಾರ ಇಲಾಖೆಯಲ್ಲಿ ಯಶಸ್ವಿನಿ ಯೋಜನೆಗಳನ್ನು ಮುಂದುವರೆಸಿದ್ದು, ಲೆಕ್ಕಶೀರ್ಷಿಕೆ 2425–00–108–0–57ರಲ್ಲಿ ₹.16911.00 ಲಕ್ಷಗಳ ಆಯವ್ಯಯ ಅವಕಾಶ ಕಲ್ಪಿಸಿದೆ.

ಮೇಲೆ ಓದಲಾದ (2)ರ ಸರ್ಕಾರದ ಆದೇಶದ ಕಂಡಿಕೆ (12)ರನ್ವಯ ಮೊದಲ ಮೂರು ಕಂತುಗಳಲ್ಲಿ ಹಣವನ್ನು ತಲಾ ಶೇ25ರಂತೆ ಶೇ.75ರಷ್ಟು ಹಣವನ್ನು ಬಿಡುಗಡೆ ಮಾಡಲು ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಿಗೆ ವಿತ್ತಾಧಿಕಾರ ಪ್ರತ್ಯಾಯೋಜಿಸಲಾಗಿರುತ್ತದೆ.

ಮೇಲೆ ಓದಲಾದ (3)ರಲ್ಲಿನ ಸರ್ಕಾರದ ಆದೇಶದಲ್ಲಿ ಯೋಜನೆಯ ಅನುದಾನದ ಪೈಕಿ ಮೊದಲೆರಡು ಕಂತಿನಲ್ಲಿ ಒಟ್ಟು ₹.8444.50 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ.

ಓದಲಾದ (4)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಮೂರನೇ ಕಂತು ₹.4227.75 ಲಕ್ಷಗಳನ್ನು ಬಿಡುಗಡೆಗೆ ಕೋರಿರುತ್ತಾರೆ. ಮೊದಲೆರಡು ಕಂತಿನಲ್ಲಿ ಬಿಡುಗಡೆಯಾಗಿರುವ ಪೂರ್ಣ ಮೊತ್ತ ₹.8455.50 ಲಕ್ಷಗಳು ಬಳಕೆಯಾಗಿರುವುದಾಗಿ ದೃಢೀಕೃತ ಬಳಕೆ ಪ್ರಮಾಣ ಪತ್ರ ನೀಡಿರುತ್ತಾರೆ. ವಿವರಗಳು ಸಂಕ್ಷಿಪ್ತವಾಗಿ ಕೆಳಕಂಡಂತ್ತಿರುತ್ತದೆ.

**ಲೆಕ್ಕಶೀರ್ಷಿಕೆ : 2425–00–108–0–57** ( ₹ ಲಕ್ಷಗಳಲ್ಲಿ)

| ಕ್ರ. ಸಂ | ಲೆಕ್ಕಶೀರ್ಷಿಕೆ | ವಿವರ | ಮಂಜೂರಾದ ಅನುದಾನ | ಮೊದಲೆರಡು ಕಂತಿನಲ್ಲಿ ಬಿಡುಗಡೆಯಾಗಿರುವ ಅನುದಾನ | ಬಾಕಿ ಉಳಿದಿರುವ ಅನುದಾನ |
|---|---|---|---|---|---|
| 1 | 2425–00–108–0–57–059 | ಇತರೆ ಖರ್ಚುಗಳು | 13638.00 | 6819.00 | 6819.00 |
| 2 | 2425–00–108–0–57–422 | ಪರಿಶಿಷ್ಟ ಜಾತಿ ಉಪಯೋಜನೆ | 1914.00 | 957.00 | 957.00 |
| 3. | 2425–00–108–0–57–423 | ಗಿರಿಜನ ಉಪಯೋಜನೆ | 1359.00 | 679.50 | 679.50 |
| | | **ಒಟ್ಟು ರೂ.** | **16911.00** | **8455.50** | **8455.50** |

ಮೇಲ್ಕಂಡಂತೆ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಇ 277 ಸಿಎಲ್‌ಎಸ್ 2016, ಬೆಂಗಳೂರು. ದಿನಾಂಕ: 10–11–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2016–17ನೇ ಸಾಲಿಗೆ ಯಶಸ್ವಿನಿ ಆರೋಗ್ಯ ರಕ್ಷಣಾ ಯೋಜನೆ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ರೂ.4227.75 ಲಕ್ಷಗಳನ್ನು (₹. ನಾಲ್ಕು ಸಾವಿರದ ಇನ್ನೂರ ಇಪ್ಪತ್ತೇಳು ಮತ್ತು ಎಪ್ಪತ್ತೈದು ಮಾತ್ರ) ಮೂರನೇ ಕಂತಾಗಿ ಲೆಕ್ಕಶೀರ್ಷಿಕೆ "2425–00–108–0–057" ಯೋಜನೆ ಅಡಿಯಲ್ಲಿ ಬಿಡುಗಡೆ ಮಾಡಲು ಮಂಜೂರಾತಿ ಆದೇಶ ಹೊರಡಿಸಿದೆ.

(ಮೊತ್ತ ₹ ಲಕ್ಷಗಳಲ್ಲಿ)

| ಕ್ರ. ಸಂ. | ಲೆಕ್ಕ ಶೀರ್ಷಿಕೆ | ವಿವರ | ಮೂರನೇ ಕಂತಿನಲ್ಲಿ ಬಿಡುಗಡೆ ಮಾಡಿದ ಮೊತ್ತ |
|---|---|---|---|
| 1. | 2425–00–108–0–57–059 | ಇತರೆ ಖರ್ಚುಗಳು | 3409.50 |
| 2. | 2425–00–108–0–57–422 | ಪರಿಶಿಷ್ಟ ಜಾತಿ ಉಪಯೋಜನೆ | 478.50 |
| 3. | 2425–00–108–0–57–423 | ಗಿರಿಜನ ಉಪಯೋಜನೆ | 339.75 |
| | | **ಒಟ್ಟು** | **4227.75** |

ಈ ಮೊತ್ತವನ್ನು ಹಣ ಸ್ವೀಕೃತಿ ರಸೀದಿ ಮೇಲೆ ಸಹಕಾರ ಸಂಘಗಳ ನಿಬಂಧಕರ ಮೇಲುರುಜುವಿನೊಂದಿಗೆ ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಹೈನುಗಾರಿಕೆ), ಸಹಕಾರ ಸಂಘಗಳ ನಿಬಂಧಕರ ಕಛೇರಿ ಇವರು ಖಜಾನೆಯಿಂದ ಯಶಸ್ವಿನಿ ಯೋಜನೆಗೆ ಡ್ರಾ ಮಾಡಿ ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿನಲ್ಲಿರುವ ಯಶಸ್ವಿನಿ ಟ್ರಸ್ಟ್‌ನ ಉಳಿತಾಯ ಖಾತೆಗೆ ಜಮಾ ಮಾಡಲು ಅಧಿಕಾರ ನೀಡಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 3 ಟಿಎಫ್‌ಪಿ 2016, ದಿನಾಂಕ:02–04–2016ರಲ್ಲಿ ಸರ್ಕಾರದ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿರವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ:ಸಇ 107 ಆಂಆಸ(ಎ) 2016 ದಿನಾಂಕ: 09–11–2016 ರಲ್ಲಿನ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವೆಂಕಟಸ್ವಾಮಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,

ಸಹಕಾರ ಇಲಾಖೆ.

**PR-653**
**SC-25**

## ಆರ್ಥಿಕ ಸಚಿವಾಲಯ

**ವಿಷಯ :** ಖಜಾನೆಗಳ ಅಭಿರಕ್ಷೆಯಲ್ಲಿಡುವ ಪ್ರಶ್ನೆ ಪತ್ರಿಕೆಗಳು ಹಾಗೂ ಇತರ ಸಂಬಂಧಿತ ಗೌಪ್ಯ ಸಾಮಾಗ್ರಿಗಳ ವಿತರಣೆ – ನಿಗಧಿತ ಅವದಿಗೆ ಮುಂಚಿತವಾಗಿ ವಿತರಿಸಲು ಖಜಾನಾಧಿಕಾರಿಗಳಿಗೆ ಸೂಚನೆ ನೀಡುವ ಪ್ರಾಧಿಕಾರವನ್ನು ನಿರ್ದೇಶಕರು, ಖಜಾನೆ ಇಲಾಖೆ ಅವರಿಗೆನೀಡುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರಿ ಪತ್ರ ಸಂಖ್ಯೆ: ಆಇ 194 ಆಖಇ 2015, ದಿ: 03–10–2015.

(2) ಸರ್ಕಾರಿ ಆದೇಶ ಸಂಖ್ಯೆ: ಆಇ 194 ಆಖಇ 2015 ದಿ: 13–11–2015 ಹಾಗೂ 11–12–2015.

(3) ನಿರ್ದೇಶಕರು, ಖಜಾನೆ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಖನಿ/ ಪ್ರಕ್ರಿಯೆ/ 01/2015–16, ದಿ: 16–04–2016.

**ಪ್ರಸ್ತಾವನೆ**

ಕೇಂದ್ರ ಲೋಕಸೇವಾ ಆಯೋಗ, ಕರ್ನಾಟಕ ಲೋಕಸೇವಾ ಆಯೋಗಗಳು ನಡೆಸುವ ಪರೀಕ್ಷೆಗಳು, ವಿವಿಧ ಇಲಾಖೆಗಳ ಇಲಾಖಾ ಪರೀಕ್ಷೆಗಳು ಶಿಕ್ಷಣ ಇಲಾಖೆಯು ನಡೆಸುವ ಎಸ್.ಎಸ್.ಎಲ್.ಸಿ. ಪಿ.ಯು.ಸಿ., ಸಿ.ಇ.ಟಿ. ಪರೀಕ್ಷೆಗಳು, ವಿವಿಧ ಪ್ರಾಧಿಕಾರಗಳು ನಡೆಸುವ ಪರೀಕ್ಷೆಗಳ ಸಂಬಂಧ ರಾಜ್ಯದ ಖಜಾನೆಗಳ ಅಭಿರಕ್ಷೆಯಲ್ಲಿ ಇಡಲಾಗುವ ಪ್ರಶ್ನೆ ಪತ್ರಿಕೆಗಳು ಹಾಗೂ ಸಂಬಂಧಿಸಿದ ಇತರ ಗೌಪ್ಯ ಸಾಮಗ್ರಿಗಳನ್ನು ಖಜಾನೆಗಳಿಂದ ಒಂದು ಗಂಟೆ ಮುಂಚಿತವಾಗಿ ಸಂಬಂಧಿಸಿದ ಪ್ರಾಧಿಕಾರಿಗಳಿಗೆ ವಿತರಿಸಬೇಕೆಂಬ ಕರ್ನಾಟಕ ಖಜಾನೆ ಸಂಹಿತೆಯ ಅನುಚ್ಛೇದ 18 (ಎ)ರಲ್ಲಿನ ಅಪವಾದವನ್ನು ಸಡಿಲಿಸಿ ಮೇಲೆ (1)ರಲ್ಲಿ ಓದಲಾದ ದಿ: 3–10–2015ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ನಡೆಸಿದ ಪ್ರಥಮ ದರ್ಜೆ ಸಹಾಯಕ, ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳ ನೇಮಕಾತಿ ಪರೀಕ್ಷೆಯ ಪ್ರಶ್ನೆಪತ್ರಿಕೆಗಳು ಹಾಗೂ ಉತ್ತರ ಪತ್ರಿಕೆಗಳನ್ನು ಪರೀಕ್ಷೆಗೆ 2 ಗಂಟೆ ಮುಂಚಿತವಾಗಿ ವಿತರಿಸಲು ಖಜಾನೆ ನಿರ್ದೇಶಕರಿಗೆ ವಿನಾಯಿತಿ ನೀಡಲಾಯಿತು.

ಅನಂತರ ನಿರ್ದೇಶಕರು, ಖಜಾನೆ ಇಲಾಖೆ ಅವರ ಪ್ರಸ್ತಾವನೆಯನ್ನು ಪರಿಶೀಲಿಸಿ ಮೇಲೆ (2)ರಲ್ಲಿ ಓದಲಾದ ದಿ: 13–11–2015 ಮತ್ತು ದಿ: 11–12–2015ರ ಆದೇಶಗಳಲ್ಲಿ ಪರೀಕ್ಷಾ ಪ್ರಾಧಿಕಾರಗಳ ಕೋರಿಕೆಗನುಸಾರ ಕರ್ನಾಟಕ ಖಜಾನೆ ಸಂಹಿತೆಯ ಅನುಚ್ಛೇದ 18–ಎ ರಡಿ ಅಪವಾದದಲ್ಲಿ ಒಂದು ಗಂಟೆ ಮುಂಚಿತವಾಗಿ ವಿತರಿಸಬೇಕೆಂಬ ನಿಯಮವನ್ನು ಸಡಿಲಿಸಿ ಪ್ರಶ್ನೆಪತ್ರಿಕೆ ಮತ್ತು ಓ.ಎಂ.ಆರ್. ಶೀಟ್ಸ್‌ಗಳನ್ನು ನಿರ್ದೇಶಕರ ಅವಶ್ಯಕತೆಗನುಸಾರ ಖಜಾನೆ ನಿರ್ದೇಶಕರ ವಿವೇಚನೆಯಂತೆ ವಿತರಿಸಲು ಖಜಾನೆ ನಿರ್ದೇಶಕರಿಗೆ ಅಧಿಕಾರ ನೀಡಲಾಗಿತ್ತು.

ಖಜಾನೆ ನಿರ್ದೇಶಕರು ಮೇಲೆ (3)ರಲ್ಲಿ ಓದಲಾದ ದಿ: 27–06–2016ರ ಪತ್ರದಲ್ಲಿ ಖಜಾನೆಗಳಿಂದ ಪರೀಕ್ಷಾ ಕೇಂದ್ರಗಳಿಗೆ ಇರುವ ದೂರವನ್ನು ಗಮನದಲ್ಲಿ ಇಟ್ಟುಕೊಂಡು ನಿಗಧಿತ ಅವಧಿಗಿಂತ ಮುಂಚಿತವಾಗಿ ಖಜಾನೆಗಳಿಂದ ಪರೀಕ್ಷಾ ಗೌಪ್ಯ ಸಾಮಾಗ್ರಿಗಳನ್ನು ಪಡೆದು ವಿತರಿಸುವ ಅವಶ್ಯಕತೆ ಮತ್ತು ಜವಾಬ್ದಾರಿ ಸಂಬಂಧಿತ ಪರೀಕ್ಷಾ ಪ್ರಾಧಿಕಾರಗಳದ್ದಾಗಿರುತ್ತದೆಯೇ ಹೊರತು ನಿರ್ದೇಶಕರ ಅವಶ್ಯಕತೆಯಾಗಿರುವುದಿಲ್ಲ ಎಂದು ತಿಳಿಸಿ ಪರೀಕ್ಷಾ ಪ್ರಾಧಿಕಾರಿಗಳ ಅವಶ್ಯಕತೆ ಹಾಗೂ ಲಿಖಿತ ಕೋರಿಕೆಗಳನುಸಾರ ಪರಿಶೀಲಿಸಿ ನಿಗಧಿತ ಅವಧಿಗಿಂತ ಮುಂಚೆ ಪ್ರಶ್ನೆ ಪತ್ರಿಕೆಗಳು ಮತ್ತು ಇತರ ಸಂಬಂಧಿತ ಗೌಪ್ಯ ಸಾಮಗ್ರಿಗಳನ್ನು ವಿತರಿಸಲು ಖಜಾನಾಧಿಕಾರಿಗಳಿಗೆ ಸೂಚನೆಗಳನ್ನು ನೀಡುವ ಪ್ರಾಧಿಕಾರವನ್ನು ಖಜಾನೆ ನಿರ್ದೇಶಕರಿಗೆ ನೀಡುವ ಕುರಿತಂತೆ ಉಲ್ಲೇಖ(2)ರ ಸರ್ಕಾರಿ ಆದೇಶಗಳನ್ನು ಪರಿಷ್ಕರಿಸಿ ಪರಿಷ್ಕೃತ ಆದೇಶ ನೀಡುವಂತೆ ಕೋರಿದ್ದಾರೆ.

ಖಜಾನೆ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಕರ್ನಾಟಕ ಖಜಾನೆ ಸಂಹಿತೆಯ ಅನುಚ್ಛೇದ 18(ಎ) ರಡಿಯ ಅಪವಾದಕ್ಕೆ ತಿದ್ದುಪಡಿ ತರುವ ಅವಶ್ಯಕತೆ ಇದರಲ್ಲಿ ಕಂಡುಬಂದಿದೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತಿದೆ.

### ಆದೇಶ ಸಂಖ್ಯೆ: ಆಇ 194 ಆಖಇ 2015, ಬೆಂಗಳೂರು, ದಿನಾಂಕ: 22.10.2016

ಸರ್ಕಾರಿ ಆದೇಶ ಸಂಖ್ಯೆ : ಆಇ 194 ಆಖಇ 2015 ದಿ: 11–12–2015ನ್ನು ಪರಿಷ್ಕರಿಸಿದ ಸರ್ಕಾರವು ಕರ್ನಾಟಕ ಖಜಾನೆ ಸಂಹಿತೆಯ ಅನುಚ್ಛೇದ 18(ಎ)ರಡಿಯ ಅಪವಾದಕ್ಕೆ ತಿದ್ದುಪಡಿ ಮಾಡುವುದನ್ನು ಬಾಕಿ ಇಟ್ಟು ಪ್ರತಿ ವರ್ಷ ನಡೆಸಲಾಗುವ ಎಸ್.ಎಸ್.ಎಲ್.ಸಿ. ಪಿ.ಯು.ಸಿ., ಸಿ.ಇ.ಟಿ. ರಾಜ್ಯ ಮತ್ತು ಕೇಂದ್ರ ಲೋಕಸೇವಾ ಆಯೋಗದ ಪರೀಕ್ಷೆಗಳು ಹಾಗು ರಾಜ್ಯದ ವಿವಿಧ ಇಲಾಖೆಗಳ ಇಲಾಖಾ ಪರೀಕ್ಷಾ ಪ್ರಾಧಿಕಾರಗಳು ನಡೆಸುವ ಪರೀಕ್ಷೆಗಳ ಸಂಬಂಧ ನಿಯಮಾನುಸಾರ ರಾಜ್ಯದ ಖಜಾನೆಗಳ ಅಭಿರಕ್ಷೆಯಲ್ಲಿ ಇಡಲಾಗುವ ಪ್ರಶ್ನೆಪತ್ರಿಕೆಗಳು ಹಾಗೂ ಸಂಬಂಧಿಸಿದ ಇತರ ಗೌಪ್ಯ ಸಾಮಾಗ್ರಿಗಳು ಇತ್ಯಾದಿಗಳನ್ನು ಪರೀಕ್ಷೆ ಪ್ರಾರಂಭವಾಗುವ ಒಂದು ಗಂಟೆ ಮುಂಚಿತವಾಗಿ ಖಜಾನೆಯಿಂದ ವಿತರಿಸಬೇಕೆಂಬ ನಿಯಮವನ್ನು ಸಡಿಲಿಸಿ ಪರೀಕ್ಷಾ ಪ್ರಾಧಿಕಾರಿಗಳ ಅವಶ್ಯಕತೆ ಹಾಗೂ ಲಿಖಿತ ಕೋರಿಕೆಯನುಸಾರ ಪರಿಶೀಲಿಸಿ ನಿಗಧಿತ ಅವಧಿಗಿಂತ ಮೂರು ಗಂಟೆಗಳ ಮುಂಚೆ ಪ್ರಶ್ನೆ ಪತ್ರಿಕೆಗಳನ್ನು ಹಾಗೂ ಸಂಬಂಧಿಸಿದ ಇತರ ಗೌಪ್ಯ ಸಾಮಾಗ್ರಿಗಳನ್ನು ವಿತರಿಸಲು ಖಜಾನಾಧಿಕಾರಿಗಳಿಗೆ ಸೂಚನೆಗಳನ್ನು ನೀಡುವ ಪ್ರಾಧಿಕಾರವನ್ನು ಖಜಾನೆ ನಿರ್ದೇಶಕರಿಗೆ ನೀಡಲಾಗಿದೆ.

ಕರ್ನಾಟಕ ಖಜಾನೆ ಸಂಹಿತೆಯ ಅನುಚ್ಛೇದ 18(ಎ)ರ ಅಪವಾದಕ್ಕೆ ತಿದ್ದುಪಡಿ ಮಾಡಲು ಪ್ರತ್ಯೇಕ ಕ್ರಮ ಕೈಗೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

PR-650

**ಜಿ.ಶಶಿಧರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

## ಆರ್ಥಿಕ ಸಚಿವಾಲಯ

**ವಿಷಯ :** ಖಜಾನೆ ಇಲಾಖೆಯಲ್ಲಿ ಇ–ಸಂದಾಯಗಳನ್ನು ನಿರ್ವಹಿಸುವ ಸಲುವಾಗಿ ಸೈಬರ್ ಖಜಾನೆಯನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :**
(1) ಖಜಾನೆ ನಿರ್ದೇಶಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಖನಿ/ಪ್ರಕ್ರಿಯೆ/16/–2016–17, ದಿನಾಂಕ: 04–05–2016.
(2) ಕಾರ್ಯದರ್ಶಿಗಳು (ಖಜಾನೆ–2) ರವರ ಪತ್ರ ಸಂ: ಖ2/ಪಿ.ಎಂ.ಯು/3/2016–17, ದಿ: 11–05–2016.
(3) ಖಜಾನೆ ನಿರ್ದೇಶಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಖನಿ/ಪ್ರಕ್ರಿಯೆ/16//2016–17, ದಿನಾಂಕ: 16–09–2016.

**ಪ್ರಸ್ತಾವನೆ**

ನಿರ್ದೇಶಕರು , ಖಜಾನೆ ಇಲಾಖೆ ಅವರು ಮೇಲೆ (1)ರಲ್ಲಿ ಓದಲಾದ ದಿನಾಂಕ: 04–05–2016ರ ಪತ್ರದಲ್ಲಿ ಬೆಂಗಳೂರು ನಗರ ಜಿಲ್ಲಾ ಖಜಾನೆಯು ರಾಜ್ಯದ ಇತರೆ ಜಿಲ್ಲಾ ಖಜಾನೆಗಳಂತೆ ಬೆಂಗಳೂರು ನಗರ ಜಿಲ್ಲೆಯ ಕಾರ್ಯವ್ಯಾಪ್ತಿ ಹೊಂದಿರುವ ಜಿಲ್ಲಾ ಖಜಾನೆಯಾಗಿದ್ದು, ಪ್ರಮುಖವಾಗಿ ಸರ್ಕಾರದ ಜಮೆ, ಶೇವಣಿಗಳು, ಜಿಲ್ಲಾ ಪಂಚಾಯತ್ ಪಾವತಿಗಳು ಹಾಗೂ ಅಧಿಕ ಸಂಖ್ಯೆಯ ಸಾಮಾಜಿಕ ಪಿಂಚಣಿಗಳ ಪಾವತಿಗಳನ್ನು ನಿರ್ವಹಿಸುತ್ತಿದೆ. ಇ–ಸಂದಾಯಗಳು ರಾಜ್ಯ ಕಾರ್ಯವ್ಯಾಪ್ತಿಯಾಗಿದ್ದು, ಇದನ್ನು ನಿರ್ವಹಸಲು ಪ್ರತ್ಯೇಕವಾಗಿ ರಾಜ್ಯ ಮಟ್ಟದ ಸೈಬರ್ ಖಜಾನೆಯನ್ನು ಹೊಂದುವುದು ಅವಶ್ಯವಾಗಿದ್ದು, ಇ–ಸಂದಾಯಗಳ ಲೆಕ್ಕವನ್ನು ಕೇಂದ್ರೀಕೃತವಾಗಿ ನಿರ್ವಹಿಸಲು ಬೆಂಗಳೂರಿನಲ್ಲಿ ರಾಜ್ಯ ಸೈಬರ್ ಖಜಾನೆಯನ್ನು (State Cyber Treasury) ಈ ಕೆಳಕಂಡ ಹುದ್ದೆಗಳೊಡನೆ ಸೃಜಿಸುವಂತೆ ಕೋರಿದ್ದಾರೆ.

| | | |
|---|---|---|
| 1) | ಸಹಾಯಕ ನಿರ್ದೇಶಕರು | 1 ಹುದ್ದೆ |
| 2) | ಸಹಾಯಕ ಖಜಾನಾಧಿಕಾರಿಗಳು | 2 ಹುದ್ದೆಗಳು |
| 3) | ಮುಖ್ಯ ಲೆಕ್ಕಿಗರು | 2 ಹುದ್ದೆಗಳು |
| 4) | ಪ್ರಥಮ ದರ್ಜೆ ಸಹಾಯಕರು | 4 ಹುದ್ದೆಗಳು |
| 5) | ದ್ವಿತೀಯ ದರ್ಜೆ ಸಹಾಯಕರು | 4 ಹುದ್ದೆಗಳು |
| 6) | 'ಡಿ' ದರ್ಜೆ | 2 ಹುದ್ದೆಗಳು |

ನಿರ್ದೇಶಕರು ಖಜಾನೆ ಇಲಾಖೆರವರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 86 ಆಖಇ 2015, ಬೆಂಗಳೂರು, ದಿನಾಂಕ: 24.10.2016**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ಖಜಾನೆ ಇಲಾಖೆಯಲ್ಲಿ ಇ–ಸಂದಾಯಗಳ ಲೆಕ್ಕವನ್ನು ಕೇಂದ್ರೀಕೃತವಾಗಿ ನಿರ್ವಹಿಸಲು ಉದ್ದೇಶದಿಂದ ಬೆಂಗಳೂರಿನಲ್ಲಿ ಒಂದು ಸೈಬರ್ ಖಜಾನೆಯನ್ನು ಸೃಜಿಸಲು ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ. ಉದ್ದೇಶಿತ ಸೈಬರ್ ಖಜಾನೆಯನ್ನು ರಾಜ್ಯ ಕಾರ್ಯವ್ಯಾಪ್ತಿಯನ್ನು ಹೊಂದಿದ್ದು, ಈ ಕೆಳಕಂಡ ಕರ್ತವ್ಯಗಳನ್ನು ನಿರ್ವಹಿಸುತ್ತದೆ.

1) ಇಂಟರ್‌ನೆಟ್ ಬ್ಯಾಂಕಿಂಗ್ ಹಾಗೂ ಇಲಾಖಾ ಪೋರ್ಟಲ್ ಗಳ ಮೂಲಕ ಜಮೆಯಾದ ಎಲ್ಲಾ ಇ–ಜಮೆಗಳನ್ನು ಲೆಕ್ಕ ಮಾಡುವ ಏಕೈಕ ಲೆಕ್ಕ ಘಟಕವಾಗಿ (ಖಜಾನೆ) ನಿರ್ವಹಿಸುವುದು.

2) ಇ–ಜಮೆ ಸ್ಕ್ರೋಲ್ ಗಳ ಪ್ರಾಥಮಿಕ ಮಟ್ಟದ ಲೆಕ್ಕ ಸಮನ್ವಯೀಕರಣವನ್ನು ನಿರ್ವಹಿಸುವುದು.

3) ಇ–ಜಮೆ ಸ್ಕ್ರೋಲ್ ಗಳ ಲೆಕ್ಕ ಸಮನ್ವಯೀಕರಣ ಸಮಯದಲ್ಲಿ ಕಂಡುಬರುವ ಯಾವುದೇ ವ್ಯತ್ಯಾಸಗಳ ಸಂಬಂಧ ತಪ್ಪು ಒಪ್ಪುಗಳ ಜ್ಞಾಪನವನ್ನು ತಯಾರಿಸಿ (MoE-Memorandum of Error) ಅದರ ಇತ್ಯಾರ್ಥಕ್ಕಾಗಿ ಸಂಬಂಧಪಟ್ಟ ಬ್ಯಾಂಕಿನೊಂದಿಗೆ ವ್ಯವಹರಿಸುವುದು.

4) ಸಮನ್ವಯೀಕರಣಕ್ಕಾಗಿ ಲೆಕ್ಕ ವರದಿಗಳನ್ನು ಸಂಬಂಧಿಸಿದವರಿಗೆ ಲಭ್ಯಗೊಳಿಸುವುದು.

5) ಖಜಾನೆ–2 ರಲ್ಲಿ ರೂಪಿಸಿರುವಂತೆ ದೈನಂದಿನ ಹಾಗೂ ಮಾಸಿಕ ಲೆಕ್ಕಗಳನ್ನು ಸಂಬಂಧಪಟ್ಟ ಪ್ರಾಧಿಕಾರಿಗಳಿಗೆ (ಮಹಾಲೇಖಪಾಲರು/ ಜಿಲ್ಲಾ ಪಂಚಾಯತ್/ ತಾಲ್ಲೂಕು ಪಂಚಾಯತ್) ಇತರೆ ಜಿಲ್ಲಾ ಖಜಾನೆಗಳಂತೆ ರವಾನಿಸುವುದು.

ಈ ಸೈಬರ್ ಖಜಾನೆಗೆ ಅವಶ್ಯವಾದ ಸಿಬ್ಬಂದಿಯನ್ನು ಖಜಾನೆ ಇಲಾಖೆಯಲ್ಲಿ ಹಾಲಿ ಇರುವ ಸಿಬ್ಬಂದಿ ಬಲದಿಂದ ಈ ಕೆಳಕಂಡಂತೆ ಮರುವಿನ್ಯಾಸಗೊಳಿಸಿ ನಿರ್ವಹಿಸುವುದು.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| **ಕ್ರಮ ಸಂ.** | **ಸೈಬರ್ ಖಜಾನೆಗಾಗಿ ಅವಶ್ಯವಿರುವ ಹುದ್ದೆಗಳು** | **ಅವಶ್ಯವಿರುವ ಹುದ್ದೆಗಳ ಸಂಖ್ಯೆ** | **ಮರುವಿನ್ಯಾಸಕ್ಕಾಗಿ ಪ್ರಸ್ತಾಪಿಸಿರುವ ಕಛೇರಿ** | **ಮಂಜೂರಾದ ಒಟ್ಟು ಹುದ್ದೆಗಳ ಸಂಖ್ಯೆ** | **ಸೈಬರ್ ಖಜಾನೆಗೆ ಮರು ವಿನ್ಯಾಸಗೊಳಿಸಿರುವ ಹುದ್ದೆಗಳ ಸಂಖ್ಯೆ** |
|---|---|---|---|---|---|
| 1 | ಸಹಾಯಕ ನಿರ್ದೇಶಕರು | 1 | ಖಜಾನೆ ನಿರ್ದೇಶನಾಲಯ ಬೆಂಗಳೂರು | 11 | 1 |
| 2 | ಸಹಾಯಕ ಖಜಾನಾಧಿಕಾರಿಗಳು | 2 | ಖಜಾನೆ ನಿರ್ದೇಶನಾಲಯ ಬೆಂಗಳೂರು | 29 | 2 |
| 3 | ಮುಖ್ಯ ಲೆಕ್ಕಿಗರು | 2 | ಖಜಾನೆ ನಿರ್ದೇಶನಾಲಯ ಬೆಂಗಳೂರು | 21 | 2 |
| 4 | ಪ್ರಥಮ ದರ್ಜೆ ಸಹಾಯಕರು | 4 | ಖಜಾನೆ ನಿರ್ದೇಶನಾಲಯ ಬೆಂಗಳೂರು | 26 | 1 |
| | | | ರಾಜ್ಯ ಹುಜೂರು ಖಜಾನೆ, ಬೆಂಗಳೂರು | 34 | 2 |
| | | | ಪಿಂಚಣಿ ಬಟವಾಡೆ ಖಜಾನೆ, ಬೆಂಗಳೂರು | 18 | 1 |
| 5 | ದ್ವಿತೀಯ ದರ್ಜೆ ಸಹಾಯಕರು | 4 | ಖಜಾನೆ ನಿರ್ದೇಶನಾಲಯ ಬೆಂಗಳೂರು | 27 | 2 |
| | | | ರಾಜ್ಯ ಹುಜೂರು ಖಜಾನೆ, ಬೆಂಗಳೂರು | 18 | 1 |
| | | | ಪಿಂಚಣಿ ಬಟವಾಡೆ ಖಜಾನೆ, ಬೆಂಗಳೂರು | 10 | 1 |
| 6 | 'ಡಿ' ದರ್ಜೆ | 2 | ಹೊರಗುತ್ತಿಗೆ ಆಧಾರದ ಮೇಲೆ ನೇಮಕಾತಿ | | |

ಸಹಾಯಕ ನಿರ್ದೇಶಕರು ಕಛೇರಿ/ಖಜಾನೆ ಮುಖ್ಯಸ್ಥರಾಗಿದ್ದು, ಬೆಂಗಳೂರು ನಗರ ಜಿಲ್ಲಾ ಖಜಾನೆಯಲ್ಲಿ ಹಣ ಸೆಳೆಯುವ ಹಾಗೂ ಬಟವಾಡೆ ಅಧಿಕಾರಿಗಳಾಗಿ "ಲೆಕ್ಕ ಶೀರ್ಷಿಕೆ 2054–00–097 ಖಜಾನೆ ಮತ್ತು ಲೆಕ್ಕಗಳ ಆಡಳಿತ" ದಲ್ಲಿ ವೇತನ ಭತ್ಯೆಗಳನ್ನು ಸೆಳೆಯುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**PR-651**

**ಜಿ.ಶಶಿಧರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59.